# ಕಾನನ

ನಿಸರ್ಗದೆಡೆಗೆ ಪಯಣ


ಸಂಪಾದಕೀಯ

ಅಶ್ವಥ ಕೆ.ಎನ್

ಲೇಖನ ವೃಂದ

ಮಹದೇವ ಕೆ.ಸಿ

ಅಶ್ವಥ ಕೆ.ಎನ್

ಮೋಹನ್ ತಲಕಾಲುಕೊಪ್ಪ

ಶಂಕರಪ್ಪ ಕೆ.ಪಿ

ಸುಬ್ಬು ಬಾದಲ್

ಶ್ರೀಕಾಂತ್ ಬಿ. ಭಟ್

ವಿನ್ಯಾಸ

ಮಹದೇವ ಕೆ.ಸಿ

ಛಾಯಾಚಿತ್ರ

ಕಾರ್ತಿಕ್ ಎ.ಕೆ



ಇ-ವಿಳಾಸ

kaanana.mag@gmail.com

www.issuu.com/kaanana



ಮುಖಪುಟ

ಹಡಗು ಮತ್ತು ಸಮುದ್ರ

WILDLIFE CONSERVATION GROUP




# ಸಂಪಾದಕೀಯ

ನಾವು ವಿಶ್ವ ಪರಿಸರದಿನ ಹಾಗೂ ವಿಶ್ವ ಸಮುದ್ರದಿನಗಳನ್ನು ವರ್ಷ ವರ್ಷವೂ ತಪ್ಪದೆ ಆಚರಿಸುವ ಸಾಂಪ್ರದಾಯಿಕ ಹಬ್ಬಗಳಂತೆ, ತಿಥಿ ಶ್ರಾದ್ಧಗಳಂತೆ, ತಪ್ಪದೆ ಆಚರಿಸಿಕೊಂಡು ಬರುತ್ತಿದ್ದೇವೆ. ಏಕೆಂದರೆ ಕೆಲವು ವಿಷಯಗಳು ನಮ್ಮ ಕಿವಿಯ ಮೇಲೆ ಪದೇ ಪದೆ ಬೀಳದಿದ್ದರೆ ಅದೂ ಈ ವಿದ್ಯುನ್ಮಾನ ಯುಗದ ಮಾಹಾನ್ ಕೊಳ್ಳುಬಾಕ ಸಂಸ್ಕೃತಿಯ ಜಾಹೀರಾತು ಯುಗದಲ್ಲಿ ಒಮ್ಮೆ ಕೇಳಿದ್ದು ಮೆದುಳಿಗೂ ಹೋಗುವುದಿಲ್ಲ. ಪರಿಸರಸ್ನೇಹಿ, ಸರಳಜೀವನ ಶೈಲಿ, ಈ ಪದಗಳು ಅನ್ಯಗ್ರಹೀಯ ಪದಗಳಂತೆ ಕಾಣುತ್ತವೆ!.

ನೂರಾರು ಲಕ್ಷ ಟನ್ನು ಕಸವನ್ನು, ಕೀಟನಾಷಕಗಳನ್ನು ಸಮುದ್ರದಾಳಕ್ಕೆ ಸುರಿದಿದ್ದೇವೆ. ಅಲ್ಲೆಲ್ಲೋ ತೈಲಟ್ಯಾಂಕರ್ ಹೊಡೆದು ತೈಲವೆಲ್ಲಾ ಚೆಲ್ಲಿ ಸಮುದ್ರದ ಜೀವಿಗಳಿಗೆ ಸಂಚಕಾರ ತಂದಿದ್ದೇವೆ. ಕಳೆದ ನೂರೈವತ್ತು ವರ್ಷದಲ್ಲಿ ಭೂಮಿಯ ಚಿತ್ರಣವನ್ನೇ ಬದಲಿಸಿದ್ದೇವೆ.

ನಮಗೆ ರೋಗವೇನಾದರೂ ಬಂದರೆ ಬೇಗ ಡಾಕ್ಟರ್ ಬಳಿ ಹೋಗಿ ಕಾಣುತ್ತೇವೆ. ಭೂಮಿಗೆ ಜ್ವರವೇರುತ್ತಿದೆ!. ಜೀವಜಲ ಕೊಳಕಾಗಿದೆ. ಹುಸಿರಾದ ಮಾರುತಗಳು ದಿಕ್ಕು ತಪ್ಪುತ್ತಿವೆ. ಕಾಡು, ಜೀವರಾಶಿ ಬರಿದಾಗುತ್ತಿದೆ!. ಆರಾಮವಾಗಿ ತಿನ್ನುತ್ತಾ, ನಿನ್ನ ಕೆಲಸವನ್ನು ನೀನು ಮಾಡಿಕೊಂಡು ಬದುಕುತ್ತಿರುವ ನೀನೇ ಈ ಎಲ್ಲದಕು ಕಾರಣನೂ ಎಂದರೆ ನಿಮಗೆ ಖಂಡಿತ ಕೋಪಬರುತ್ತೆ.! ಆದರೆ ನಮಗೆ ಬೇರೆ ವಿಧಿಯಿಲ್ಲ. ಸತ್ಯವನ್ನು ಅರಗಿಸಿಕೊಳ್ಳುವುದು ತುಂಬಾ ಕಷ್ಟ.

ಜನರಿಂದ ತುಂಬಿ ತುಳುಕುತ್ತಿರುವ ಈ ಭೂಮಿಯಲ್ಲಿ ಉಳಿದ ಜೀವಗಳು ಉಳಿಯ ಬೇಕಾದರೆ ನಾವು ಅತಿ ಬೇಗ ನಮ್ಮ ಜೀವನ ಶೈಲಿಯನ್ನು ಬದಲಿಸಿ ಕೊಳ್ಳಬೇಕಿದೆ. ಬಳಸಿ ಬಿಸಾಡುವುದನ್ನು ಬಿಡಬೇಕಿದೆ. ಮರುಬಳಸುವ, ಇರುವುದನ್ನು ಹಂಚಿಕೊಳ್ಳುವ ಗುಣವನ್ನು ಮತ್ತೆ ಕಲಿಯಬೇಕಿದೆ. ನವನಾಗರೀಕರಾದ ನಾವು ಹೊಸದಿಕ್ಕಿನಲ್ಲಿ ಯೋಚಿಸಬೇಕಿದೆ. ಭೂಮಿ ಸಾಯುವ ಮೊದಲು, ಭೂಮಿಗೆ ಭಾರವಾಗದಂತೆ ಸರಳ, ಪರಿಸರ ಸ್ನೇಹಿ ಬದುಕನ್ನು ಬದುಕುವ ಕಲೆಯನ್ನು ಅನ್ವೇಷಿಸಬೇಕೆದೆ. ನಾವು ಕಲಿಯಬೇಕಿದೆ. ಮಕ್ಕಳಿಗೂ ಕಲಿಸಬೇಕಿದೆ.

**WILDLIFE CONSERVATION GROUP**




ಬಂಡೀಪುರ ಹಾಗೂ ನಾಗರಹೊಳೆಯನ್ನಾಗಿ ಬೇರ್ಪಡಿಸುವ ನದಿಯೆ ಕಬಿನಿ. ಕಬಿನಿ ಜಲಾಶಯದಿಂದ ಇಂದು ಎಷ್ಟೋ ವನ್ಯಮೃಗಗಳಿಗೆ ಬೇಸಿಗೆಯಲ್ಲಿ ನೀರಿಗೆ ಆಸರೆಯಾಗಿದೆ. ಹೀಗಾಗಿಯೇ ಬೇಸಿಗೆಯಲ್ಲಿ ಕಬಿನಿಯ ಹಿನ್ನೀರು ಆನೆ, ಕಾಡೆಮ್ಮೆ, ಜಿಂಕೆಗಳ ಬಿಡಾರವಾಗಿ ಮಾರ್ಪದೆ. ಹೀಗಾಗಿ ವರ್ಷಕ್ಕೆ ಒಮ್ಮೆಯಾದರೂ ಕಬಿನಿಗೆ ಭೇಟಿ ಕೊಡುವುದು ನಮಗೆ ವಾಡಿಕೆಯಾಗಿದೆ. ಬೇಸಿಗೆ ಸನಿಹಿಸುತ್ತಿದ್ದಂತೆ ಕಬಿನಿ ಹಿನ್ನೀರಿನಲ್ಲಿ ನೀರು ಕಡಿಮೆಯಾಗಿ ಹೇರಳವಾದ ನದಿ ಜಾಗವೆಲ್ಲ ಹಚ್ಚ ಹಸಿರಾಗುತ್ತದೆ. ಇದೇ ಹುಲ್ಲನ್ನ ತಿನ್ನಲು ಆನೆ, ಜಿಂಕೆಗಳು ಗುಂಪು ಗುಂಪಾಗಿ ಬರುತ್ತವೆ. ಹುಲ್ಲನ್ನ ಕಾಲಿನಿಂದ ಒದ್ದು ಒದ್ದು ಸೊಂಡಿಲಿನಿಂದ ಒದರಿ ತಿನ್ನುವ ಚಾಣಾಕ್ಷತನ ನೋಡುವುದೇ ಒಂದು ಸೊಬಗು!.

ಮೊನ್ನೆ ತಾನೆ ಗೆಳೆಯ ಜೈರಾಮ್ ಜೊತೆ ಕಬಿನಿಗೆ ಭೇಟಿ ನೀಡಿದ್ದಾಗ ಕಂಡಂತ '***ಕತ್ತಿ ಚಿಟ್ಟೆ***' (Graphium nomius) ಬಗ್ಗೆ ವಿವರಿಸುತ್ತೇನೆ. ಕಬಿನಿ ನದಿಯ ಹಿನ್ನೀರು ಹಿಂಗುತ್ತಿದ್ದತೆ ನೀರಿನ ಜಾಗವೆಲ್ಲ ಕೆಸರು ತುಂಬಿ ನಂತರ ಬಿಸಿಲ ಬೆಗೆಗೆ ಕೆಸರು ಒಣಗಿ ಕೇಸರಿನ ಬಿರುಕುಗಳಲ್ಲಿ ಹುಲುಸಾದ ಗರಿಕೆಯ ಹುಲ್ಲು ಬೆಳೆಯುತ್ತದೆ. ಆ ಕೆಸರುನಲ್ಲಿರುವ ನೀರಿನಾಂಶವನ್ನು ಹೀರಲು ಈ ಕತ್ತಿಚಿಟ್ಟೆಗಳು ಬಂದು ಕೂರುತ್ತವೆ. ಇವುಗಳ ಮೇಲಿನ ರೆಕ್ಕೆ ಹಾಗೂ ಹಿಂಭಾಗದ ರೆಕ್ಕೆಯ ಮೇಲೆ ನಾಲ್ಕು ಬಿಳಿ ಪಟ್ಟೆಗಳಿರುತ್ತವೆ. ಅವು ರೆಕ್ಕೆಯ ತುದಿಯಲ್ಲಿ ಒಂದಾದಂತೆ ಕಾಣುತ್ತದೆ. ರೆಕ್ಕೆಯ ಅಂಚುಗಳಲ್ಲಿ ಬಿಳಿ ಚುಕ್ಕೆಗಳ ಸಾಲಿರುತ್ತದೆ. ಕೆಳರೆಕ್ಕೆಯ ಮುಂಭಾಗ ಹಾಗೂ ತಳಭಾಗದಲ್ಲಿ ದೊಡ್ಡ ಬಿಳಿಗೆರೆಗಳಿದ್ದು, ಅದರ ಕೆಳಗೆ ಎರಡು ಕೆಂಪು ಗೆರೆಗಳನ್ನೂ ಕಾಣಬಹುದು. ವಿಶೇಷವೆಂದರೆ ಕೆಳರೆಕ್ಕೆಗಳಲ್ಲಿ ಉದ್ದವಾದ ಬಾಲ ಇರುವುದರಿಂದ ಇವುಗಳನ್ನು ಸುಲಭವಾಗಿ ಗುರುತಿಸಬಹುದು. ಹೆಚ್ಚಾಗಿ ಫೆಬ್ರವರಿಯಿಂದ ಜೂನ್ ತನಕ ಕಂಡು ಬರುತ್ತವೆ. ವಯಸ್ಕ ಚಿಟ್ಟೆಗಳು ಕುರುಚಲು ಮತ್ತು ಎಲೆ ಉದುರುವ ಕಾಡುಗಳಲ್ಲಿ ಕಾಣಸಿಗುತ್ತವೆ. 70-95 ಮಿಮಿ ಉದ್ದದ ರೆಕ್ಕೆ ಇದ್ದು ಉತ್ತಮವಾಗಿ ಹಾರಬಲ್ಲವು.

- ಮಹಾದೇವ ಕೆ. ಸಿ.





# ಹಕ್ಕಿಲೋಕ

*** ಒಂದು ವಿಹಾರ**

**Large Pied Wagtail** ***Motacilla maderaspatensis***

ಅದು ಬೇಸಿಗೆಯ ಸಂಜೆ, ವಿಹಾರಿಸಲೆಂದು ವಾಜರಗುಡಿಸಲ ಕಾಡಿನ ಪಕ್ಕದಲ್ಲೇ ಇರುವ ಸದಾ ಕಾಲ ನೀರು ಇರುವ ಒಂದು ಸಣ್ಣ ಕೆರೆ. ನಾವು ಚಿಕ್ಕಂದಿನಲ್ಲಿದ್ದಾಗ ಅಲ್ಲಿ ಕೆರೆ ಇರಲ್ಲಿಲ್ಲ, ಬದಲಿಗೆ ಒಂದು ಸಣ್ಣ ತೊರೆ, ಆದನ್ನು ಅತ್ತಿಮರದ ಹಳ್ಳ ಎಂದು ಕರೆಯುತ್ತಿದ್ದರು. ಆ ಹಳ್ಳದಲ್ಲಿ ಅತ್ತಿಮರಗಳು ಹೆಚ್ಚಾಗಿ ಬೆಳೆದು ನಿಂತ್ತಿದ್ದರಿಂದ ಆ ಹಳ್ಳಕ್ಕೆ ಆ ಹೆಸರು. ಈಗಲೂ ಹಳ್ಳದಲ್ಲಿ ಅತ್ತಿಮರಗಳ ಸಾಲು ನೋಡಬಹುದು. ಮಳೆಗಾಲದಲ್ಲಿ ಸಣ್ಣಗೆ ನೀರು ಹರಿದು ಹಳ್ಳಕ್ಕೆ ಸೇರಿ ಕೊಳ್ಳುತ್ತದೆ. ಆದರೆ ಈಗ ಪಾರೆಷ್ಟಿನವರು ಆ ಹಳ್ಳಕ್ಕೆ ಅಡ್ಡಲಾಗಿ ಕಟ್ಟೆಕಟ್ಟಿ ಸದಾ ನೀರು ನಿಲ್ಲುವಂತೆ ಸಣ್ಣ ಕೆರೆ ಮಾಡಿದ್ದಾರೆ. ಕೆರೆ ಮಾಡಿದ ನಂತರ ಅಲ್ಲಿಗೆ ಆನೆ, ಕಾಡುಕೋಣ, ಜಿಂಕೆ, ಹಂದಿ ಮೊದಲಾದ ಪ್ರಾಣಿಗಳು ಈ ಕೆರೆಗೆ ನೀರಿಗಾಗಿ ಬರುತ್ತಿರುವುದನ್ನು ನೋಡಲೆಂದೆ ಸಂಜೆಯ ಸಮಯದಲ್ಲಿ ಅತ್ತಿಮರದ ಹಳ್ಳದ ಕಡೆ ಓಡಾಡಿಕೊಂಡು ಬಾರಲೆಂದು ಆಗಾಗ ಹೊರಡುತ್ತೇನೆ.

ಕೆರೆಯ ಸುತ್ತ ಕಾಡು, ಹಣ್ಣಿನ ಮರಗಳು, ಪೊದೆಗಳು, ಪಕ್ಕದ ನೀರು ಹೇಳಬೇಕೆ? ಹಕ್ಕಿಗಳಿಗೆ ಹೇಳಿಮಾಡಿಸಿದ ಜಾಗ, ಅಂದು ಕೆರೆಯ ಬಳಿ ಹಕ್ಕಿಗಳ ಸದ್ದು ಜೊರಾಗೆ ಇತ್ತು. ಕೆರೆಯ ಒಂದು ಮೂಲೆಯ ದಡದಲ್ಲಿ ಕುಳಿತು ಪಕ್ಷಿಗಳನ್ನು ಗಮನಿಸುತ್ತಾ ಕುಳಿತೆ.



ಪಿಕಳಾರಗಳಷ್ಟು ಗಾತ್ರವಿರುವ, ಅವುಗಳ ಪುಕ್ಕಗಳ ಸಮೂಹ ತೇಟ್ **ಮ್ಯಾಗ್ ಪೀ ರಾಬಿನ್ (ಮಡಿವಾಳ)** ಹಕ್ಕಿಯನ್ನೇ ಹೋಲುತ್ತದೆ. ಆದರೆ ಒಂದು ವ್ಯತ್ಯಾಸ, ಮಡಿವಾಳಗಳಂತೆ ಬಾಲವನ್ನು ಮೇಲೆತ್ತಿ ಹಿಡಿಯುವುದಿಲ್ಲ, ಬದಲಿಗೆ ಬಾಲವನ್ನು ಸದಾ ಕುಣಿಸುತ್ತವೆ. ಅದಕ್ಕೆ ಈ ಹಕ್ಕಿಗಳಿಗೆ **ಕುಂಡೆಕುಸ್ಕ** ಎಂಬ ಇನ್ನೊಂದು ಹೆಸರು. ಸಾಮಾನ್ಯವಾಗಿ ಹಳ್ಳಿ ಕೆರೆಗಳ ಪಕ್ಕದಲ್ಲಿ ಜೊತೆ ಜೊತೆಯಾಗಿ ಈ ಹಕ್ಕಿಗಳು ಕಂಡು ಬರುತ್ತವೆ.



ನಾನು ಹಕ್ಕಿಗಳ ಸುಮಧುರ ರಾಗವನ್ನು ಹಾಲಿಸುತ್ತಾ ಕುಳಿತ್ತಿದ್ದೆ. ಬೇಸಿಗೆಯಾದರಿಂದ ಕೆರೆಯ ನೀರು ಸ್ವಲ್ಪ ಕಡಿಮೆಯಾಗಿ ನೀರಿನ ಸುತ್ತ ಕೆಸರಿನ ಹಂಚು. ತಿಳಿನೀರಿನ ಸಣ್ಣ ಸಣ್ಣ ಅಲೆಗಳು ಬಂದು ಕೆಸರಿನ ದಿಬ್ಬಕ್ಕೆ ಅಪ್ಪಳಿಸಿ ಹಿಂದಿರುಗುತ್ತಿದ್ದವು. ದಡದ ಮೇಲೆ ಕುಳಿತ್ತಿದ್ದ ನನಗೆ ಕೆಸರಿನ ವಾಸನೆ ಮೂಗಿಗೆ ರಾಚಿ, ಮನಸ್ಸಿಗೆ ಏನೋ ಒಂದು ರೀತಿ ಆಗಿತ್ತು. ನನ್ನ ಕಣ್ಣುಗಳನ್ನು ಹಾಗೇ ಕೆರೆಯ ನೀರಿನ ಹಂಚಿನಲ್ಲೇ ಒಮ್ಮೆ ತೇಲಿಸಿದೆ. ಕಣ್ಣುಗಳ ದೃಷ್ಟಿ ಅದೇನನ್ನೋ ಹುಡುಕಲು ಪ್ರಾರಂಭಿಸಿದವು, ಆ ತಿಳಿನೀರ ಹಂಚುಗಳು ಸೂರ್ಯನ ಕೆಂಬಣ್ಣಕ್ಕೆ ಚಿನ್ನದಂತೆ ಒಳೆಯುತ್ತಿತ್ತು. ಬೆಳಗ್ಗೆಯಿಂದ ಕಾದು ಬಿಸಿಯಾಗಿದ ನೀರು, ಮಣ್ಣಿನಿಂದ ನವಿರಾದ ಹೊಗೆ ನಿಧಾನವಾಗಿ ಆಕಾಶಕ್ಕೆ ತೇಲಿಹೋಗುತ್ತಿತ್ತು. ಆ ಹೊಗೆಯ ನಡುವೆ ಸಣ್ಣ ಸಣ್ಣ ಸಾವಿರಾರು ನುಸಿ ಹುಳುಗಳು ಹಾರಡುತ್ತಿದ್ದವು. ಆ ಸಣ್ಣ ನೊಣಗಳನ್ನು ಇಡಿಯಲು ಬಾಲ ಕುಣಿಸುತ್ತಾ ನೀರಿನ ಹಂಚಿನ ಕೆಸರಿನಲ್ಲಿ ಶಿಳ್ಳೆಯಾಕುತ್ತಾ ನಡೆದು ಕೆರೆಯನ್ನು ಪ್ರದಕ್ಷಿಸುತ್ತಿದವು. ಮೂರ್ನಾಕು ಕಪ್ಪು-ಬಿಳಿ ಸಿಪಿಲೆಗಳು. ನಾನು ಗಮನಿಸಿದ ಹಾಗೆ ಬಂಡೆಗಳ ಮೇಲೆ ಹರಿಯುವ ನೀರಿನ ಪಕ್ಕದಲ್ಲಿ,ಮತ್ತು ಮನೆಯ ಮಾಳಿಗೆಯ ಮೇಲೆ ಕುಳಿತು ಅಥವಾ ಬಟ್ಟೆ ಒಗೆಯುವ ಕಲ್ಲುಗಳ ಮೇಲೆ ನಿರಾತಂಕವಾಗಿ ಆಹಾರನ್ವೇಷಣೆ ಮಾಡುತ್ತಾ ಅಲೆದಾಡುತ್ತಿರುತ್ತವೆ. ಸಂತಾನ ಕಾಲದಲ್ಲಿ ಗಂಡುಗಳು ಬಂಡೆಗಳ ಮೇಲೆ ಮನೆಗಳ ಮಾಳಿಗೆಯ ಮೇಲೆ ಕುಳಿತು ಮನೋಹರವಾಗಿ ಶಿಳ್ಳೆ ಹಾಕುವಂತೆ ಹಾಡುತ್ತವೆ. ಮಾರ್ಚ್ ನಿಂದ ಸೆಪ್ಟೆಂಬರ್ ತಿಂಗಳಲ್ಲಿ ನೀರಿನ ಬಳಿ ಹುಲ್ಲು, ಬೇರು, ನಾರುಗಳಿಂದ ಕೂಡಿದ ಬಟ್ಟಲಿನಾಕಾರದ ಗೂಡನ್ನು ಕಟ್ಟಿ, ಸುಮಾರು ಮೂರು ನಾಲ್ಕು ಬೂದು ಮಿಶ್ರಿತ ಕಂದು ಮೊಟ್ಟೆಗಳಿಗೆ ಕಾವುಕೊಟ್ಟು ಮರಿ ಮಾಡುತ್ತವೆ.

ಮತ್ತೆ ಯಾವುದಾದರು ಪ್ರಾಣಿಗಳು ಬರುವುದನ್ನು ಎದರು ನೋಡುತ್ತಾ ಕುಳಿತೆ, ಪಡುವಣದಲ್ಲಿ ಸೂರ್ಯನ್ನು ನಿಧಾನವಾಗಿ ಮರೆಯಾಗುತ್ತಿಯಿದ್ದನು, ಹಕ್ಕಿಗಳ ಕಲರವ ಮೇಲನೆ ಕಡಿಮೆಯಾಗುತ್ತಾ ಬಂದಿತು. ಎಲ್ಲಾ ಹಕ್ಕಿಗಳು ತಂತಮ್ಮ ಮನೆಗಳಿಗೆ ಹೋಗುವುದನ್ನು ಹಾಗೇ ಗಮನಿಸಬಹುದಿತ್ತು. ಸೂರ್ಯ ದೂರದ ಬೆಟ್ಟಗಳಲ್ಲಿ ಮುಳುಗಿ ಹೋದ. ಕತ್ತಲಾಗುತ್ತ ಬಂತು. ಮನೆಗೆ ಹಿಂದಿರುಗಲು ಸಿದ್ದನಾಗಿ ಎದ್ದು ನಿಂತೆ. ಅತ್ತಿಮರದ ಹಳ್ಳದ ದೂರದಲ್ಲಿ ಆನೆಗಳ ಗೀಳು ಕೇಳಿಸಿ ಕೆರೆಗೆ ದಾವಿಸುವ ಮುನ್ಸೂಚನೆಯನ್ನು ಕೊಟ್ಟವಾದರೂ ಕತ್ತಲಾದ ಕಾರಣ ನಾನು ಮನೆಯ ಕಡೆ ಬರಲೇ ಬೇಕಾಯಿತು



- ಅಶ್ವಥ ಕೆ.ಎನ್



# ಪಾತರಗಿತ್ತಿ ಪಕ್ಕಾ .. ನೋಡಿದೇನ ಅಕ್ಕ..

ಸ್ವಚ್ಛಂದವಾಗಿ ಹಾರಾಡುವ, ಹೂವಿಂದ ಹೂವಿಗೆ ಜಿಗಿಯುವ ಚಿಟ್ಟೆಗಳನ್ನು ಕಂಡಾಗ, ಓಹ್! ಅವುಗಳ ವರ್ಣವೈಭವಕ್ಕೆ ಮನ ಸೋಲುತ್ತದೆ. ಕಡುಗೆಂಪು, ಅಚ್ಚ ಬಿಳಿ, ಹಳದಿ, ತಿಳಿ ನೀಲಿ, ಒಮ್ಮೊಮ್ಮೆ ಎರಡು ಮೂರು ಬಣ್ಣಗಳ ಹದವಾದ ಮಿಶ್ರಣ.. .. ಚಿತ್ತಾರದ ಗೆರೆಗಳು, ವೃತ್ತಗಳು.. .. ಅದೊಂದು ವರ್ಣಗಳ ಮಾಯಾಲೋಕ. ಅವು ಹಾರಾಡುವ ಬಣ್ಣಗಳು! ಅದಕ್ಕೇ ವರಕವಿ ಬೇಂದ್ರೆ ಹೇಳಿದ್ದಿರಬಹುದು 'ಎನು ಬಣ್ಣ ಬಣ್ಣ ನಡುವೆ ನವಿಲಗಣ್ಣ, ರೇಷಿಮೆ ಪಕ್ಕ ನಯಾ, ಮುಟ್ಟಲಾರೆ ಭಯ ಮುಂದುವರಿದು ಚಿಟ್ಟೆಯನ್ನು 'ಹುಲ್ಲುಗಾವಲಿನಲ್ಲಿ ವಿಹರಿಸುವ ಹಳ್ಳಿ ಹುಡುಗಿಗೆ ಹೋಲಿಸುತ್ತಾರೆ. ಫಕ್ಕನೆ ಬಂದು ಎಲ್ಲಿ ಮಾಯವಾಗಿಬಿಡುತ್ತವೆ ಈ ಸುಂದರ ಹಾರುವ ಬಣ್ಣದ ತಟ್ಟೆಗಳು? 'ಕಾಣದೆಲ್ಲೋ ಮೂಡಿ ಬಂದು ಗಾಳಿಗೋಡಿ, ಇನ್ನು ಎಲ್ಲಿ ಗೋಟ ನಂದನದ ತೋಟ' ಎಂದು ಅವರೇ ಉತ್ತರವನ್ನು ನೀಡುತ್ತಾರೆ.

ಜೀವ ವೈವಿಧ್ಯ ಶ್ರೀಮಂತ ದೇಶ ನಮ್ಮದು. ಹಾಗೆಯೇ ಪಶ್ಚಿಮಘಟ್ಟಗಳ ಹಾಗೂ ಹಿಮಾಲಯ ತಪ್ಪಲಿನ ಜೀವವೈವಿಧ್ಯವೂ ಅನನ್ಯ. ಆದರೆ ಜನಸಂಖ್ಯೆಯಲ್ಲೂ ಶ್ರೀಮಂತರು ನಾವು! ಇದರ ಒತ್ತಡ ಅಪರಿಮಿತವಾಗಿ ಅಮೂಲ್ಯ ನೈಸರ್ಗಿಕ ಸಂಪನ್ಮೂಲಗಳು ವಿನಾಶದ ಹಾದಿಯಲ್ಲಿ. ಆದರೆ ಏನೂ ಉಳಿಯುವುದಿಲ್ಲ ಎಂಬ ನಿರಾಶೆ ಬೇಡ. ಈ ರೀತಿಯ ಪರಿಸ್ಥಿತಿಯನ್ನು ಅವಲೋಕಿಸಿಯೇ ಹಲವಾರು ಸಂರಕ್ಷಣಾ ಕಾರ್ಯಗಳನ್ನು (ಹುಲಿ, ಅನೆ ಸಂರಕ್ಷಣೆ ಇತ್ಯಾದಿ) ಹಮ್ಮಿಕೊಂಡ ಹೆಮ್ಮೆಯೂ ನಮ್ಮದು! ಆದರೆ ದೊಡ್ಡ ದೊಡ್ಡ ಪ್ರಾಣಿಗಳನ್ನು ಸಂರಕ್ಷಿಸುವ ಭರದಲ್ಲಿ ಸಣ್ಣ ಗಾತ್ರದ ಆದರೆ ಪರಿಸರದ ಬಹುಮುಖ್ಯ ಅಂಗವಾದ ಕೀಟ ಸಾಮ್ರಾಜ್ಯವನ್ನೇ ಮರೆಯುತ್ತಿದ್ದೇವೆ. ನಮ್ಮ ದೇಶದಲ್ಲಿ ಸುಮಾರು ೬೦,೦೦೦ ಕೀಟ ಪ್ರಭೇದಗಳಿವೆಯಂತೆ. ಈ ಸಣ್ಣ ಕೀಟಗಳಿಂದ ಎಷ್ಟೆಲ್ಲಾ ಉಪಯೋಗ! ಸಸ್ಯಗಳ ಅನಿಯಂತ್ರಿತ ಬೆಳವಣಿಗೆ ಹಾಗು ವಿಸ್ತರಣೆಗೆ ಕಡಿವಾಣ ಹಾಕುವುದಲ್ಲದೆ, ಬೆಳೆಗಳ ಪರಾಗಸ್ಪರ್ಶದಲ್ಲಿಯೂ ಪ್ರಮುಖ ಪಾತ್ರ ವಹಿಸುತ್ತವೆ. ಜೇನು ತುಪ್ಪ, ರೇಷ್ಮೆ ಇತ್ಯಾದಿಗಳ ಬಗ್ಗೆ ನಿಮಗೆ ಗೊತ್ತು. ಕೀಟಗಳು ಕೊಳೆತ ಪದಾರ್ಥಗಳನ್ನು ತಿಂದು, ಸ್ವಚ್ಛ ಗೊಳಿಸುವ ಕಾರ್ಯವನ್ನೂ ನಿರ್ವಹಿಸುತ್ತವೆ. ನೀವು ಒಪ್ಪದಿರಬಹುದು. 'ಕೀಟಗಳಿಂದ ನಮಗೆ ಎಷ್ಟೆಲ್ಲಾ ತೊಂದರೆಗಳಿದೆ. ನಮ್ಮ ಬೆಳೆಗಳನ್ನು ತಿಂದು ನಾಶ ಗೊಳಿಸುತ್ತವೆ; ಹಲವಾರು ರೋಗಗಳನ್ನು ಹರಡುತ್ತವೆ' ಇತ್ಯಾದಿ. ಅದರೂ ಅವುಗಳಿಂದಾಗುವ ಉಪಯೋಗಗಳನ್ನು ಗಮನಿಸಿದರೆ ತೊಂದರೆ ಕಡಿಮೆ ಪ್ರಮಾಣದ್ದು.

ಕೀಟ ಸಾಮ್ರಾಜ್ಯದಲ್ಲಿ ಥಟ್ಟನೆ ಗಮನಸೆಳೆಯುವ, ಬೆರಗು ಗೊಳಿಸುವ, ಅಬಾಲವೃದ್ಧರಾದಿಯಾಗಿ ಎಲ್ಲರಿಗೂ ಮುದ ನೀಡುವುದು ನಿಸ್ಸಂಶಯವಾಗಿ ಚಿಟ್ಟೆ. ವರ್ಣವೈವಿಧ್ಯ ಹಾಗು ಪಾರಿಸಾರಿಕ ಆರೋಗ್ಯದ ದೃಷ್ಟಿಯಿಂದ ಚಿಟ್ಟೆಗೆ ವಿಶಿಷ್ಟ ಸ್ಥಾನವಿದೆ. ಬೆಂಗಳೂರಿನ ಅಶೋಕ ಪರಿಸರ ಸಂಶೋಧನಾ ಕೇಂದ್ರದ ಡಾ. ಸುಭದ್ರಾ ದೇವಿ ಹೇಳುತ್ತಾರೆ 'ಜಗತ್ತಿನಲ್ಲಿ ಸುಮಾರು ೧೭,೦೦೦ ಚಿಟ್ಟೆ ಪ್ರಭೇದಗಳಿವೆ ಎಂಬುದು ಒಂದು ಅಂದಾಜು. ಕೆಲವು ಪ್ರಭೇದಗಳನ್ನಷ್ಟೆ ಕರಾರುವಕ್ಕಾಗಿ ಗುರುತಿಸಲಾಗಿದೆ. ಉಳಿದವನ್ನು ಗುರುತಿಸುವ ಕಾರ್ಯ ಬಾಕಿ ಇದೆ. ಭಾರತದಲ್ಲಿ ಸುಮಾರು ೧೫೦೦ ಚಿಟ್ಟೆ ಪ್ರಭೇದಗಳಿವೆ'.



ನಿಸರ್ಗ ಚಿಟ್ಟೆಗೆ ಹುಳುವಾಗಿದ್ದಾಗ ಸಸ್ಯಗಳನ್ನು ತಿಂದು ಅನಂತರ ಪರಾಗಸ್ಪರ್ಶವನ್ನು ಮಾಡುವ ಕೆಲಸವನ್ನು ನಿರ್ವಹಿಸಿದೆ. ಈ ಪರಾಗ ಸ್ಪರ್ಶಕ್ರಿಯೆಯನ್ನು ಕವಿ ಮನ ಹೇಗೆ ಗಮನಿಸುತ್ತದೆ ನೋಡಿ. 'ಹೂವಿನ ಪಕಳೀಗಿಂತ ತಿಳಿವು ತಿಳಿವು ಅಂತ, ಹೂವಿಗೆ ಹೋಗಿತ್ತಾವ, ಗಲ್ಲ ತಿವಿತಾವ' ಅಂದರೆ ಎಲ್ಲರಿಂದಲೂ ಕಲಿಯಬೇಕು ಅಂತ ಹೂಗಳಿಗೆ ಭೇಟಿ ನೀಡುತ್ತವಂತೆ! ಇನ್ನೊಬ್ಬ ಕವಿ 'ಹುಳುವಾಗಿ ಎಲೆಗಳನ್ನು ತಿಂದು ಎಳೆಗಿಡಗಳನ್ನು ಕೊಂದ ಪಾಪಕ್ಕೆ ಪ್ರಾಯಶ್ಚಿತ್ತ ಚಿಟ್ಟೆಯ ಪರಾಗಸ್ಪರ್ಶ ವ್ರತ' ಎನ್ನುತ್ತಾರೆ. ಚಿಟ್ಟೆಯ ಲಾರ್ವಾಗಳು ಹಲವಾರು ಪರೋಪಜೀವಿಗಳಿಗೆ ಅಶ್ರಯ ಕೊಡುವುದಲ್ಲದೆ ಹಲವಾರು ಪಕ್ಷಿಗಳಿಗೆ ಅಹಾರವೂ ಆಗುತ್ತವೆ. ಚಿಟ್ಟೆಗಳನ್ನೂ ಕೆಲವು ಹಕ್ಕಿಗಳು ತಿನ್ನುತ್ತವೆ. ಹೀಗೆ ಆಹಾರ ಸರಪಣಿಯಲ್ಲಿ ಪ್ರಮುಖ ಕೊಂಡಿಯಾಗುತ್ತವೆ. ಹೆಚ್ಚೇಕೆ, 'ಚಿಟ್ಟೆಗಳು ಯಾವುದೇ ಪರಿಸರದ ಆರೋಗ್ಯ ಸೂಚಿಸುವ 'ದಿಕ್ಸೂಚಿ' ಪ್ರಭೇದಗಳಾಗಿ ಕಾರ್ಯನಿರ್ವಹಿಸುತ್ತವೆ. ಮನುಷ್ಯನಿಂದ ಸಸ್ಯಗಳ ಹಾಗು ಪರಿಸರದ ಮೇಲಾಗಿರುವ ದುಷ್ಪರಿಣಾಮಗಳನ್ನು ಸೂಚ್ಯವಾಗಿ ತಮ್ಮ ಸಂಖ್ಯೆಯಲ್ಲಿ ಇಳಿಮುಖವಾಗುವ ಮೂಲಕ ತಿಳಿಸುತ್ತವೆ. ಇದು ಸಾಧ್ಯವಾಗುವುದು ಸಸ್ಯಗಳೊಂದಿಗಿನ ಅವುಗಳ ನಿಕಟ ಸಂಬಂಧದಿಂದ. ಹಾಗಾಗಿ ಯಾವುದೇ ಜೀವವೈವಿಧ್ಯ ಸಂರಕ್ಷಣಾ ಕಾರ್ಯಗಳ ಕ್ಷಮತೆ ಹಾಗು ನಿರ್ವಹಣೆಯನ್ನು ತಿಳಿಯಲು ಚಿಟ್ಟೆಗಳನ್ನು ಬಳಸಬಹುದು' ಎನ್ನುತ್ತಾರೆ ಬೆಂಗಳೂರು ಕೃಷಿ ವಿ.ವಿ.ಯ ಕೀಟ ಶಾಸ್ತ್ರಜ್ಞ ಡಾ. ಚಂದ್ರಶೇಖರ್. ಬರೀ ವೈಜ್ಞಾನಿಕವಾಗಷ್ಟೇ ಅಲ್ಲ, ಸೌಂದರ್ಯದ ದೃಷ್ಟಿಯಿಂದಲೂ ಚಿಟ್ಟೆಗಳು ಬಹೂಪಯೋಗಿ! ಇತ್ತೀಚೆಗೆ ಮಲೆನಾಡಿಗೆ ಹೋಗಿದ್ದಾಗ ಹೆಂಗಳೆಯರು ಮಾತಾಡುವುದನ್ನು ಕೇಳಿಸಿ ಕೊಂಡೆ. 'ಚಿಟ್ಟೆಗಳ ಆಕರ್ಷಕ ಬಣ್ಣ ಸಂಯೋಜನೆಯನ್ನು ಚೂಡಿದಾರ್, ಸೀರೆ ಇತ್ಯಾದಿ ಅಯ್ಕೆ ಮಾಡುವಾಗ ಬಳಸಬಹುದು!' ಹೌದಲ್ಲವಾ ಎನಿಸಿತು. ಡಿಸೈನರ್ಸ್, ವರ್ಣ ಸಂಯೋಜಕರು, ಕಲಾವಿದರು ನಿಸರ್ಗದ ಪುಟ್ಟ ಚಿಟ್ಟೆಗಳಿಂದ ಕಲಿಯುವುದು ಸಾಕಷ್ಟಿದೆ.

ಇಷ್ಟೆಲ್ಲ ಉಪಯೋಗದ ಸಾಧ್ಯತೆ ಇದ್ದರೂ, ನಮಗೆ ಚಿಟ್ಟೆಗಳ ಬಗ್ಗೆ ತಿಳಿದಿರುವುದು ಕಡಿಮೆ. ವಿಜ್ಞಾನಿಗಳಿಗೂ ಚಿಟ್ಟೆಗಳ ಪ್ರಾಮುಖ್ಯತೆಯನ್ನು ತಿಳಿಸುವ ಅಗತ್ಯ ಇದೆ. ಜೊತೆಗೆ ನಮ್ಮಲ್ಲಿ ಚಿಟ್ಟೆಗಳು ಆಶ್ರಯಿಸುವ ಸಸ್ಯಗಳ ಪೂರ್ಣ ಮಾಹಿತಿ ಇಲ್ಲ. ಮಾಹಿತಿ ಗೊತ್ತಾಗುವ ಮೊದಲೆ ಈ ಸಸ್ಯಗಳ ಕಣ್ಮರೆಯಿಂದ ಚಿಟ್ಟೆಗಳು ಇಲ್ಲವಾದರೆ ಅಚ್ಚರಿಯೇನಲ್ಲ. ಅಭಿವೃದ್ಧಿಯ ಹೆಸರಿನಲ್ಲಿ ಇದ್ದ ಕಾಡು ಮೇಡು, ಹುಲ್ಲುಗಾವಲು, ಸುಮ-ಸಂಕುಲ ಎಲ್ಲ ನಾಶವಾದ ಮೇಲೆ ಚಿಟ್ಟೆಗಳಾದರೂ ಹೇಗೆ ಬದುಕಿಯಾವು? ಬೇರೆ ಕೀಟಗಳಿಗೆ ಹೋಲಿಸಿದರೆ ಚಿಟ್ಟೆಗಳ ವರ್ಗೀಕರಣವೂ ವ್ಯವಸ್ಥಿತ ರೀತಿಯಲ್ಲಿ ಅಭಿವೃದ್ಧಿಯಾಗಿಲ್ಲ. ನಮ್ಮ ದೇಶಕ್ಕೆ ಹೋಲಿಸಿದರೆ ಉತ್ತರ ಅಮೇರಿಕಾ, *ಯುರೋಪ್ ಹಾಗು ಕೆಲವು ಏಷಿಯ-ಫೆಸಿಫಿಕ್ ರಾಷ್ಟ್ರಗಳಲ್ಲಿ ಚಿಟ್ಟೆಗಳ ಬಗ್ಗೆ ಸಾಕಷ್ಟು ಅಧ್ಯಯನ ನಡೆದಿದೆ. ಚಿಟ್ಟೆಗಳ ವೈವಿಧ್ಯಕ್ಕೆ* ಹೆಸರುವಾಸಿಯಾದ ಪಪುವ ನ್ಯುಗಿನಿ ದ್ವೀಪದಲ್ಲಿಯೂ ಚಿಟ್ಟೆ ಪಾರ್ಕ್‌ಗಳನ್ನು ಸ್ಥಾಪಿಸಿ ಅವುಗಳ ನೈಸರ್ಗಿಕ ಇತಿಹಾಸ, ಪರಿಸರದೊಡನಿರುವ ಸೂಕ್ಷ್ಮ ಸಂಬಂಧ, ಹಾಗು ವರ್ಗೀಕರಣದ ಬಗ್ಗೆ ಹೆಚ್ಚಿನ ಮಾಹಿತಿ ಸಂಗ್ರಹ ನಡೆಯುತ್ತಿದೆ. ಹಾಗೆಯೇ ಅಂತಾರಾಷ್ಟ್ರೀಯ ಮಟ್ಟದಲ್ಲಿ ಚಿಟ್ಟೆಗಳ ವ್ಯಾಪಾರ ಒಂದು ಉದ್ಯಮ. ತೈವಾನ್ ಮತ್ತು ಕೊರಿಯ ಚಿಟ್ಟೆಗಳ ರಫ್ತಿನಲ್ಲಿ ಮುಂದಿವೆ.

ಈ ನಿಟ್ಟಿನಲ್ಲಿ, ಚಿಟ್ಟೆ ಸಂರಕ್ಷಣೆ ಹಾಗೂ ಅಧ್ಯಯನದ ಮೊದಲ ಹೆಜ್ಜೆಯಾಗಿ ಚಿಟ್ಟೆಗಳ ವೈವಿಧ್ಯವನ್ನು ದಾಖಲೆ ಮಾಡಿ ಜಾಲತಾಣದಲ್ಲಿ ಅಳವಡಿಸಿದ್ದಾರೆ ಬೆಂಗಳೂರಿನ ಅಶೋಕ ಪರಿಸರ ಸಂಶೋಧನಾ ಕೇಂದ್ರ (ಡಾ. ಸುಭದ್ರಾ ದೇವಿ) ಹಾಗು ಕೃಷಿ ವಿ.ವಿ. ಯ ವಿಜ್ಞಾನಿಗಳು (ಡಾ. ಕೆ. ಎನ್. ಗಣೇಶಯ್ಯ ಮತ್ತವರ ಸಹವಿಜ್ಞಾನಿಗಳು). ಈ 'ಸಹ್ಯಾದ್ರಿ ಪತಂಗಸೂಚ್ಯ' ಮಾಹಿತಿ ಖಜಾನೆಯಲ್ಲಿ ೩೦೦ಕ್ಕೂ ಹೆಚ್ಚಿನ ಚಿಟ್ಟೆ ಪ್ರಭೇದಗಳ ಛಾಯಾಚಿತ್ರಗಳು, ಇರುವಿಕೆಯ ಮಾಹಿತಿ, ಅವು ಅಶ್ರಯಿಸುವ ಸಸ್ಯಗಳ ಮಾಹಿತಿ, ವರ್ಗೀಕರಣ ಇತ್ಯಾದಿಗಳನ್ನು ಸುಮಾರು



ಒಂದು ನೂರು ವರ್ಷಗಳಲ್ಲಿ ಆದ ಸಂಶೋಧನೆಗಳ ಫಲಶೃತಿಯನ್ನಾಧರಿಸಿ ಅಳವಡಿಸಲಾಗಿದೆ. ಈಗಿರುವ ಅಭಯಾರಣ್ಯಗಳಿಂದಲೇ ಎಲ್ಲಾ ಚಿಟ್ಟೆ ಪ್ರಭೇದಗಳನ್ನೂ ರಕ್ಷಿಸಲಾಗದು ಎಂಬ ಅಂಶ ಇದರಲ್ಲಿ ಕಂಡುಬಂದಿದೆ. ಯಾಕೆಂದರೆ ರಕ್ಷಿತಾರಣ್ಯಗಳ ಹೊರಗೂ ಸಾಕಷ್ಟು ವಿಭಿನ್ನ ಪ್ರಭೇದಗಳಿವೆಯಂತೆ. ಈ ಜಾಲತಾಣದ ನೆರವಿನಿಂದ ನೀವು ನಿಮ್ಮ ಪ್ರದೇಶದ ಚಿಟ್ಟೆಗಳ ಅಧ್ಯಯನ ಮಾಡಬಹುದು. ಹೆಚ್ಚಿನ ಮಾಹಿತಿ ದೊರಕಿದರೆ ಅದನ್ನೂ ಅಳವಡಿಸಲು ಇಲ್ಲಿಯ ವಿಜ್ಞಾನಿಗಳಿಗೆ ಕಳುಹಿಸಬಹುದು.

ಈ ಮಾಹಿತಿ ಸಂಗ್ರಹದ ಜೊತೆಗೆ, ಚಿಟ್ಟೆಗಳ ಸಂರಕ್ಷಣೆ ಹಾಗು ಜನಸಾಮಾನ್ಯರಲ್ಲಿ ಈ ಬಗ್ಗೆ ಅರಿವನ್ನು ಮೂಡಿಸುವ ಸಲುವಾಗಿ, ಬೆಂಗಳೂರಿನ ಬನ್ನೇರುಘಟ್ಟದ ರಾಷ್ಟ್ರೀಯ ಉದ್ಯಾನದಲ್ಲಿ ಚಿಟ್ಟೆ ಪಾರ್ಕೊಂದು ತಲೆ ಎತ್ತಿದೆ. ಜೀವ ತಂತ್ರಜ್ಞಾನ ಇಲಾಖೆಯ ಸಹಯೋಗದೊಂದಿಗೆ, ಅಶೋಕ ಪರಿಸರ ಸಂಶೋಧನಾ ಸಂಸ್ಥೆ, ರಾಜ್ಯದ ಪ್ರಾಣಿಸಂಗ್ರಹಾಲಯ, ಅರಣ್ಯ ಇಲಾಖೆ ಹಾಗು ಕೃಷಿ ವಿ.ವಿ. ಗಳು ಈ ಯೋಜನೆಯನ್ನು ಕಾರ್ಯರೂಪಕ್ಕೆ ತಂದಿದ್ದಾರೆ. ಸಂಶೋಧನೆ, ತರಬೇತಿ, ಶಿಕ್ಷಣ ಹಾಗು ಗ್ರಾಮೀಣರಿಗೆ ಉದ್ಯೋಗಾವಕಾಶಗಳನ್ನು ಸೃಷ್ಟಿಸುವ ಉದ್ದೇಶ ಈ ಪಾರ್ಕಿನದ್ದು. ನಮ್ಮಲ್ಲಿ ಸ್ಥಳೀಯರಿಗೆ ಕೆಲವರಿಗಾದರೂ ಚಿಟ್ಟೆ ರಫ್ತು ಉದ್ಯೋಗ ಒದಗಿಸುವ ನಿಟ್ಟಿನಲ್ಲಿ ಇದು ಸಹಾಯಕವಾಗಬಹುದು. ಜೊತೆಗೆ ಚಿಟ್ಟೆ ಉದ್ಯಾನದಿಂದ ಇಕೋ-ಟೂರಿಸಂ ವೃದ್ಧಿಯಾಗುತ್ತದೆ ಎಂಬ ಆಶಯ. ಮಿಲಿಯಾಂತರ ವರ್ಷಗಳಿಂದ ಈ ಧರಣಿಯಲ್ಲಿ ವಾಸವಾಗಿದ್ದು ಈಗ ನಾಶವಾಗುತ್ತಿರುವ ಜೀವಿಗಳ ರಾಯಭಾರಿಗಳಾದ ಈ ಅಮೂಲ್ಯ ಪಾತರಗಿತ್ತಿ ಸಂಕುಲದ ಸಂರಕ್ಷಣೆ ನಮ್ಮೆಲ್ಲರ ಹೊಣೆ.

ಕೊನೆ ಗೊಂದು ಕೊಸರು:

*'ಹೂವು ಕೇಳಿತು: ಹೇಳು ಚಿಟ್ಟೆ ನನ್ನಲ್ಲೂ ಗುಟ್ಟೆ?*
*ಇ ಷ್ಟೊಂದು ಚೆಲುವು ನೀಡಿದ್ದಕ್ಕೆ*
*ದೇವರಿಗೆ ಎಷ್ಟು ಲಂಚ ಕೊಟ್ಟೆ?'*

ಇದು ಖ್ಯಾತ ಹನಿಕವಿ ಡುಂಡಿರಾಜ್ ಚಿಟ್ಟೆಯ ಸೌಂದರ್ಯದ ಮೇಲೆ ಮಾಡಿದ ವ್ಯಾಖ್ಯಾನ!

**- ಮೋಹನ್ ತಲಕಾಲುಕೊಪ್ಪ**








ಮಳೆಗಾಲದಲ್ಲಿ ಪಶ್ಚಿಮಘಟ್ಟದ ಕೆಲವು ಜಾತಿಯ ಕಪ್ಪೆಗಳು ಹರಿಯುವ ನೀರಿನ ಬಳಿ ಪ್ರಶಸ್ತವಾದ ಕಲ್ಲಿನ ಮೇಲೆ ಕುಳಿತು, ವಟ್ರು ವಟ್ರು ಎಂದು ಕೂಗಿ, ನೃತ್ಯ ಮಾಡಿ ಕೂಗಿ ಸಂಗಾತಿಗಳನ್ನು ಕರೆದು ಆಕರ್ಷಿಸುತವೆ. ಭಾರತದ ಪಶ್ಚಿಮದುದ್ದಕ್ಕೆ 1600ಕಿ.ಮೀ. ಹರಡಿರುವ ಪಶ್ಚಿಮಘಟ್ಟದಲ್ಲಿ ಹದಿನಾಲ್ಕು ಹೊಸ ಜಾತಿಯ ಕಪ್ಪೆಗಳನ್ನು ವಿಜ್ಞಾನಿಗಳು ಕಂಡು ಹಿಡಿದಿದ್ದಾರೆ. ಅವುಗಳಲ್ಲಿ ನಾಲ್ಕು ತರಹದ ಕಪ್ಪೆ ಗಳು ಕಾಲು ಕುಣಿಸುವ ಕಪ್ಪೆಗಳನ್ನು ಸೇರಿವೆ.

ಈ ಕುಣಿಸುವ ಕಪ್ಪೆಗಳಲ್ಲಿ ಗಂಡುಕಪ್ಪೆಗಳು ಮೊದಲು ಎತ್ತರವಾದ ಕಲ್ಲಿನ ಮೇಲೆ ಕುಳಿತು ಹೆಣ್ಣುಗಳನ್ನು ಕೂಗಲು ಪ್ರಾರಂಭಿಸುತ್ತವೆ. ತನ್ನ ಬಿಳಿ ಗಂಟಲು ಭಾಗವನ್ನು ಉಬ್ಬಿಸಿ ಪ್ರದರ್ಶನ ಮಾಡಿ ಮುಂಗಾಲುಗಳನ್ನು ಒಮ್ಮೆ ತಟ್ಟಿ, ಹಿಂಗಾಲನ್ನು ಮೇಲೆ ಎತ್ತಿ ಪ್ರದರ್ಶಸಿ ಜಾಡಿಸುತ್ತದೆ. ಈ ಕಾಲು ಕುಣಿತದ ಪ್ರದರ್ಶನ ಬರಿ ಹೆಣ್ಣುಕಪ್ಪೆಗಳನ್ನು ಆಕರ್ಷಿಸಲು ಮಾತ್ರವೇ ಅಲ್ಲ! ಕೆಲವು ಭಾರಿ ಬೇರೆ ಗಂಡುಗಳು ಆ ಜಾಗಕ್ಕೆ ಬಂದರೆ ಕಾಲು ಕುಣಿಸುವಂತೆ ಮಾಡಿ ಜಾಡಿಸಿ ಮುಸುಡಿಗೆ ಒದ್ದು ಓಡಿಸುತ್ತದೆ ಎಂದು. ನಮ್ಮ ಭಾರತದ ವಿಜ್ಞಾನಿಗಳು ಹನ್ನೆರಡು ವರ್ಷಗಳ ಕಾಲ ಅಧ್ಯಯನ ನಡೆಸಿ ಕಂಡು ಹಿಡಿದಿದ್ದಾರೆ.




- ಶಂಕರಪ್ಪ ಕೆ.ಪಿ



# ಕಾನನ ಬಂಧ

**ಎಡದಿಂದ ಬಲಕ್ಕೆ**

1. ಜೀವಿಯ ದೇಹದ ವಿವಿಧ ಭಾಗಗಳು (4)

2. ಈ ಕಾಡಿನಲ್ಲಿ ಸದಾ ಮಳೆ ಸುರಿಯುತ್ತದೆ  (4)

4. ಇದೊಂದು ಜಾತಿಯ ಶಿಲೀಂಧ್ರ , ಆದರೆ ನಾಯಿಗೂ ಇದಕ್ಕೂ ಸಂಬಂಧವಿಲ್ಲ (4)

7. ಬಿಳಿ ಬಣ್ಣದ ಹಕ್ಕಿ (3)

8. ಹಾರುವ ಕಲೆ ಹಾವಿಗೂ ತಿಳಿದಿದೆ (5)

10. ಸಾಲು ಸಾಲಾಗಿ ನಿಂತಿರುವ ಪರ್ವತಗಳು (4)

11. ಸಸ್ಯಗಳ ವಂಶಾಭಿವೃದ್ಧಿ ಪ್ರಕ್ರಿಯೆಯಲ್ಲಿ ಬಹುಮುಖ್ಯ ಹಂತ (5)

13. ಇದು ದೇವಲೋಕದ ಮರವಿರಬಹುದೇ ? (4)

15. ರಭಸವಾಗಿ ಬೀಸುವ ಗಾಳಿ (3)

16. ಈ ಪಕ್ಷಿಯದ್ದು ಕತ್ತಲಿನಲ್ಲೇ ರಾಜ್ಯಭಾರ (3)

**ಮೇಲಿನಿಂದ ಕೆಳಕ್ಕೆ**

1. ಒಂದು ರೀತಿಯಲ್ಲಿ ಸರಿಸಾಟಿ ಇಲ್ಲದ್ದು ಎನ್ನಬಹುದು  (4)

3. ನೆರೆ ರಾಜ್ಯದ ಈ ಸುಂದರ ವನ್ಯಪ್ರದೇಶ ವಯಸ್ಸಾದವರ ನಾಡಾಗಿರಬಹುದೇ ? (4)

5. ಮಂಡ್ಯ ಸಮೀಪದ ಈ ಹಳ್ಳಿಯಲ್ಲಿ ಮನೆಗೊಂದು ಪಕ್ಷಿ ಕುಟುಂಬ (6)

6. ಈ ಉರಗವು ಕಳಿಂಗ ದೇಶಕ್ಕೆ ಸೇರಿರಬಹುದೇ ? (5)

8. ಹಾವುಗಳೇ ಈ ಪಕ್ಷಿಯ ಮುಖ್ಯ ಆಹಾರ (5)

9. ಗೂಬೆಯೊಂದು ಇಲ್ಲಿ ತಲೆಕೆಳಗಾಗಿದೆಯಲ್ಲ (3)

12. ಬಿಳಿ ಬಣ್ಣದ ದೇಹದಲ್ಲಿ ಕಪ್ಪು ರೆಕ್ಕೆಯಿರುವ ಈ ಪಕ್ಷಿ ರಾಮ ಭಕ್ತನಲ್ಲ, ಆದರೆ ಹದ್ದುಗಳ ಜಾತಿಗೆ ಸೇರಿದ್ದು (4)

14. ಪರ್ವಕಾಲದಿಂದಲೂ ಉಳಿದು ಬಂದಿರುವ ಈ ಬೆಟ್ಟ ಇಲ್ಲಿ ಮಾತ್ರ ತಲೆಕೆಳಗಾಗಿದೆ. (3)

15. ಬೆಕ್ಕು, ಹುಲಿ, ಚಿರತೆ ಇವುಗಳ ಮೂಲ ವಂಶ  (3)

16. ನಲಿಯುತ್ತಾ ಇರುವ ನಮ್ಮ ರಾಷ್ಟ್ರಪಕ್ಷಿ (3)

**ಕಾನನ ಬಂಧ ಮೇ ಸಂಚಿಕೆಯ ಉತ್ತರಗಳು**

**ಎಡದಿಂದ ಬಲಕ್ಕೆ**

1. ಸರೀಸೃಪ,  3. ಸಸ್ಯಾಹಾರಿ,  5. ಕರವೀರ,  6. ಹರಟೆಮಲ್ಲ,  8. ತಾವರೆ, 10. ಕುಟುರ,  12. ಮಂಗ,  14. ಕಳ್ಳಿಪೀರ, 16. ಹಕ್ಕಿಪಿಕ್ಕಿ, 18. ಅರಿಶಿನ ಬುರುಡೆ,

**ಮೇಲಿನಿಂದ ಕೆಳಕ್ಕೆ**

1. ಸಸ್ಯಲೋಕ,  2. ಪರಿಸರ , 4. ಹಾವುಗೊಲ್ಲ, 7. ರಕ್ಷಿತಾರಣ್ಯ,  9. ಕುದುರೆ,  11. ಟುವ್ವಿಹಕ್ಕಿ, 12. ಮಂದಾರ, 13. ತುರಗ,  15. ಕಳ್ಳಿಗಿಡ, 17. ಪಿಕಳಾರ,

-ಸುಬ್ಬು ಬಾದಲ್

# ಏಕೆ ?

ಇದ್ದ ಕಾಲುವೆಗಳ ಕಬಳಿಸಿ
ಆಯಕಟ್ಟನು ಅತಿಕ್ರಮಿಸಿ
ಕೆರೆ ತುಂಬದು ಎಂದು ಶಪಿಸುವೆ ಏಕೆ?

ಗಿಡಮರಗಳ ಕಡಿದು
ಸಸಿಗಳನು ನೆಡದೇ
ನೆರಳು ನೆರಳೆಂದು ಕೂಗುವೆಯೇಕೆ?

ರಸಗೊಬ್ಬರ ಕೀಟನಾಶಕ ಬಳಸಿ
ಸಾವಯವ ಪದ್ಧತಿ ಅಳಿಸಿ
ಹೆಚ್ಚು ಇಳುವರಿಗಾಗಿ ಹುಚ್ಚನಾಗಿರುವೆಯೇಕೆ?

ಇದ್ದ ನೀರನು ಉಳಿಸದೇ
ಬಿದ್ದ ಮಳೆಯನು ಬಳಸದೇ
ಮತ್ತೆ ಮತ್ತೆ ಕೊಳವೆಬಾವಿಗಳನು ಕೊರೆಯುವೆ ಏಕೆ?

ಸುಂದರ ಪ್ರಕೃತಿಯ
ವಿಕೃತಗೊಳಿಸುವ
ಹೀನ ಕೃತ್ಯಗಳನು ಮಾಡುವೆಯೇಕೆ?



- ಶ್ರೀಕಾಂತ್ ಬಿ.ಭಟ್

